CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜುಲೈ ೭, ೨೦೦೫ (ಆಷಾಢ ೧೬, ಶಕ ವರ್ಷ ೧೯೨೭) | ಸಂಚಿಕೆ ೨೭ |
| --- | --- | --- |

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಟೆಂಡರ್ ಆಹ್ವಾನಿಸುವ ಪ್ರಾಧಿಕಾರ**

**ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ಪೌರರಕ್ಷಣಾ ನಿರ್ದೇಶಕರ ಕಚೇರಿ, ನಂ.1, ಅಣ್ಣಾಸ್ವಾಮಿ ಮೊದಲಿಯಾರ್ ರಸ್ತೆ, ಬೆಂಗಳೂರು-560 042.**

**ಟೆಂಡರ್ ಅಧಿಸೂಚನೆ ಸಂಖ್ಯೆ: ಉಗ್ರಾಣ(1)05/ಸಿಜಿಓ/2005-06, ದಿನಾಂಕ: 24ನೇ ಜೂನ್ 2005**

1. ನೋಂದಾವಣೆಗೊಂಡ ಉತ್ಪಾದಕರು ಮತ್ತು ಅಧಿಕೃತ ವಿತರಕರಿಂದ 100 ಕೆವಿಎ ಡೀಸೆಲ್ ಜನರೇಟರ್ ಸೆಟ್ ಒಂದನ್ನು ಉತ್ತಮ ಗುಣಮಟ್ಟದ ಅಕೌಸ್ಟಿಕ್ ಎನ್‌ಕ್ಲೋಜರ್ (ಸಿ.ಪಿ.ಸಿ.ಬಿ. ಯಿಂದ ಅನುಮೋದಿತಗೊಂಡ) ಹಾಗೂ ಅಗತ್ಯ ಪೂರಕ ಸಾಮಗ್ರಿಗಳು ಮತ್ತು ಅಂದಾಜು 900 ಮೀಟರ್ ಯು.ಜಿ. ಕೇಬಲ್‌ನೊಂದಿಗೆ ಸರಬರಾಜು ಮಾಡಿ ತತ್ಸಂಬಂಧ ಎಲೆಕ್ಟ್ರಿಕಲ್ ಮತ್ತು ಸಿವಿಲ್ ಕಾಮಗಾರಿಗಳೊಂದಿಗೆ ಅಳವಡಿಸುವ ಸಲುವಾಗಿ ಮೊಹರು ಮಾಡಿದ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಆಹ್ವಾನಿಸಲಾಗಿದೆ.
2. ಒಟ್ಟು ಅಂದಾಜು ಮೌಲ್ಯ ರೂ. 12.00 ಲಕ್ಷಗಳು - ತೆರಿಗೆಗಳು ಯಾವುದಾದರೂ ಇದ್ದಲ್ಲಿ ಅವು ಒಳಗೊಂಡಂತೆ (ಹನ್ನೆರಡು ಲಕ್ಷ ರೂ.ಗಳು ಮಾತ್ರ).
3. ಡಿಜಿಪಿ ಮತ್ತು ಗೃಹರಕ್ಷಕ ದಳದ ಮಹಾ ಸಮಾದೇಷ್ಟರು ಹಾಗೂ ನಿರ್ದೇಶಕರು, ಪೌರರಕ್ಷಣೆ, ಬೆಂಗಳೂರು ಇವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕ್ ಗಳಲ್ಲಿ ರೂ. 200/- ಗಳಿಗೆ (ಎರಡು ನೂರು ರೂಪಾಯಿಗಳು) ಮಾತ್ರ ಪಡೆದ ಡಿ.ಡಿ. ಸಂದಾಯಿಸಿ ಕೆಲಸದ ದಿನಗಳಲ್ಲಿ ಈ ಕಚೇರಿಯಿಂದ ನಿಗದಿತ ಟೆಂಡರ್ ಫಾರಂನ್ನು ಈ ಟೆಂಡರ್ ಅಧಿಸೂಚನೆ ರಾಜ್ಯ ಟೆಂಡರ್ ಬುಲೆಟಿನ್‌ನಲ್ಲಿ ಪ್ರಕಟಗೊಂಡ ದಿನಾಂಕದಿಂದ 12.8.2005 ರ ಸಂಜೆ 4.00 ಗಂಟೆಯವರೆಗೆ ಪಡೆಯಬಹುದಾಗಿದೆ.
4. ಟೆಂಡರಿನೊಂದಿಗೆ ಐಟಂ ಬೆಲೆಯ ಶೇಕಡಾ 1.5ರ ಮೌಲ್ಯದ ಇ.ಎಂ.ಡಿ ಯನ್ನು ಲಗತ್ತಿಸತಕ್ಕದ್ದು.
5. ಅಧಿಕೃಕ ವಿತರಕರು, ಉತ್ಪಾದಕರಿಂದ ನೀಡಲ್ಪಟ್ಟ ವಿತರಕರ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.
6. ಅಧಿಕೃತ ವಿತರಕರು ಯಾವುದಾದರು ಸರ್ಕಾರಿ ಸಂಸ್ಥೆಗಳಲ್ಲಿ 100 ಕೆವಿಎ ಅಥವಾ ಅದಕ್ಕೂ ಹೆಚ್ಚಿನ ಸಾಮರ್ಥ್ಯದ ಡೀಸೆಲ್ ಜನರೇಟರ್ ಸೆಟ್ ಗಳನ್ನು ಅಳವಡಿಸುವ ಕುರಿತಂತೆ ಕೈಗೊಂಡ ಕಾಮಗಾರಿಯ ಬಗ್ಗೆ ಕಾರ್ಯಪಾಲಕ ಅಭಿಯಂತರ ದರ್ಜೆಗಿಂತ ಕಡಿಮೆಯಿಲ್ಲದ ಅಧಿಕಾರಿಯಿಂದ ಪಡೆದ ದೃಢೀಕೃತ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.
7. ಅಧಿಕೃತ ವಿತರಕರು 100 ಕೆವಿಎ ಅಥವಾ ಅದಕ್ಕೂ ಹೆಚ್ಚಿನ ಸಾಮರ್ಥ್ಯದ ಡೀಸೆಲ್ ಜನರೇಟರನ್ನು ಅಕೌಸ್ಟಿಕ್ ಎನ್ ಕ್ಲೋಜರ್‌ನೊಂದಿಗೆ ಸರಬರಾಜು ಮಾಡಿ ಅಳವಡಿಸಿ, ಪರಿವೀಕ್ಷಿಸಿದ ಬಗ್ಗೆ ಕನಿಷ್ಠ ಎರಡು ವರ್ಷಗಳ ಅನುಭವವನ್ನು ಹೊಂದಿರತಕ್ಕದ್ದು. ಹಾಗೂ ಈ ಸಂಬಂಧ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.
8. ಸರಬರಾಜು ಆದೇಶ ನೀಡಿದ ದಿನಾಂಕದಿಂದ 60 ದಿನಗಳ ಕಾಲಾವಧಿಯಲ್ಲಿ ಸರಬರಾಜು ಮಾಡಿ ಅಳವಡಿಕೆಯ ಕಾರ್ಯವನ್ನು ಪೂರ್ಣಗೊಳಿಸತಕ್ಕದ್ದು.
9. ಟೆಂಡರನ್ನು ಸ್ವೀಕರಿಸಲು ಕಡೆಯ ದಿನಾಂಕ: 16.8.2005 ಸಂಜೆ 4.00 ಗಂಟೆ
10. ಟೆಂಡರನ್ನು ದಿನಾಂಕ: 18.8.2005 ರಂದು ಸಂಜೆ 4.00 ಗಂಟೆಗೆ ತೆರೆಯಲಾಗುವುದು.
11. ಯಾವುದೇ ಕಾರಣ ನೀಡದೇ ಟೆಂಡರನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾದಿರಿಸಲಾಗಿದೆ.

12. ಸ್ಪೆಸಿಫಿಕೇಷನ್:

Supply, Erection and Commissioning of 1 x 100 KVA Diesel Generator set with standard Accoustic Enclosure approved by C.P.C.B. & other required necessary accessories including laying of 900 mtrs. (approximately) U.G.Cable with connected civil and electrical works.

ಎನ್. ಶಿವಪ್ರಸಾದ್

ಪಿ.ಆರ್. 368 ಉಪ ಮಹಾ ಸಮಾದೇಷ್ಟರು ಗೃಹರಕ್ಷಕ ದಳ ಹಾಗೂ ಉಪ ನಿರ್ದೇಶಕರು,
ಪೌರರಕ್ಷಣೆ ಮತ್ತು ಟೆಂಡರ್ ಆಹ್ವಾನಿಸುವ ಪ್ರಾಧಿಕಾರ.

**Water Resource Department**

**Office of the Executive Engineer, WRD, KPC Division No. 1, Bidar**

**TIME EXTENSION NOTIFICATION**

**No.EE/KPC Divn.1/BDR/PB-6/TN/2005-06/636, Dated 22nd June 2005**

Tender invited (pre-qualification cum Tender Notification, manual and e-tendering) vide notification No. KPCD-1/BDR/PB-6/TND/2005-06/299 dated: 4.5.2005 for the work of Construction of parapet over pile foundation and asphalting of roadway over the earthern flanks on the Dam of Karanja Project, is extended as under:

| Sl. No. | Particulars | As per Tender Schedule | Extension |
|---|---|---|---|
| 1. | Pre-qualification of bidders Announcement date | 23.6.2005 | 29.6.2005 |
| 2. | Issue of Blank Tender (Financial bid) date. | 23.6.2005 to 24.6.2005 during Office hours | 29.6.2005 to 30.6.2005 during Office hours |
| 3. | Submission of filled financial bid date | 04.07.2005 from 11:00 AM to 4:00 PM | 11.7.2005 from 11:00 AM to 4:00 PM |
| 4. | Opening of Section II of (Part II) | 07.07.2005 at 11:00 AM | 14.7.2005 at 11:00 AM |
| 5. | Opening of Section I of (Part II) | 11.7.2005 at 11:00 AM | 18.7.2005 at 11:00 AM |

The remaining terms and conditions holds good as notified.

P.R. 369 Executive Engineer, WRD, KPC Divn. No. 1, Bidar.

**Water Resource Department**

**Office of the Executive Engineer, WRD, KPC Division No. 1, Bidar**

**TIME EXTENSION NOTIFICATION**

**No.EE/KPC Divn.1/BDR/PB-6/TN/2005-06/637, Dated 22nd June 2005**

Tender invited (pre-qualification cum Tender Notification, manual and e-tendering) vide notification No. KPCD-1/BDR/PB-6/TND/2005-06/300 dated: 4.5.2005 for the work of Construction of RCC trough aqueduct at KM 129.91 of Right Bank Canal of Karanja Project, is extended as under:

| Sl. No. | Particulars | As per Tender Schedule | Extension |
|---|---|---|---|
| 1. | Pre-qualification of bidders Announcement date | 23.6.2005 | 29.6.2005 |
| 2. | Issue of Blank Tender (Financial bid) date. | 23.6.2005 to 24.6.2005 during Office hours | 29.6.2005 to 30.6.2005 during Office hours |
| 3. | Submission of filled financial bid date | 04.07.2005 from 11:00 AM to 4:00 PM | 11.7.2005 from 11:00 AM to 4:00 PM |
| 4. | Opening of Section II of (Part II) | 07.07.2005 at 11:00 AM | 14.7.2005 at 11:00 AM |
| 5. | Opening of Section I of (Part II) | 11.7.2005 at 11:00 AM | 18.7.2005 at 11:00 AM |

The remaining terms and conditions holds good as notified.

P.R. 370 Executive Engineer, WRD, KPC Divn. No. 1, Bidar.

**FORM - IV**

**(See Rule 12)**

**NOTICE**

It is hereby notified that the undersigned has changed his name from **K. PUTTAMADAIAH** to **K. PUTTAMADE GOWDA.**

PD. 71 **K. PUTTAMADE GOWDA.**

## ಪ್ರಾಂಶುಪಾಲರವರ ಕಛೇರಿ, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು

### (ದರಖಾಸ್ತು ಸಹಿತ ಹರಾಜು)

**ಅಧಿಸೂಚನೆ ಸಂಖ್ಯೆ/ಸಪೊತಶಾಲೆ/ನಿರುಪಯುಕ್ತ ವಾಹನ/ 04-05, ದಿನಾಂಕ: 21ನೇ ಜೂನ್ 2005**

**ವಿಷಯ:** ಎಪಿಟಿಎಸ್, ಯಲಹಂಕದಲ್ಲಿನ ನಿರುಪಯುಕ್ತ ಪೊಲೀಸ್ ವಾಹನ ಸಂಖ್ಯೆ ಎಂ.ಇ.ಎಂ. 3100 ಫಾರ್ಗೋ ವ್ಯಾನ್ (ಮಾಡಲ್ 1972) ಟೆಂಡರ್‌ನ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಆದೇಶ ಸಂ:ಹೆಚ್‌ಡಿ:03:ಇಎಂವಿ:2004, ಬೆಂಗಳೂರು, ದಿನಾಂಕ: 12.5.2005.

2. ಪೊಲೀಸ್ ಪ್ರಧಾನ ಕಛೇರಿಯ ಹಿಂಬರಹ ಸಂ. ವಾಸಾ(1)/58/2002-03 ದಿನಾಂಕ:9.6.05.

ಈ ಮೂಲಕ ಸಾರ್ವಜನಿಕರಿಗೆ ಮಾಹಿತಿಗಾಗಿ ತಿಳಿಯಪಡಿಸುವುದೇನೆಂದರೆ, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು ಈ ಕಛೇರಿಯ ನಿರುಪಯುಕ್ತ ಪೊಲೀಸ್ ವಾಹನ ಸಂಖ್ಯೆ ಎಂ.ಇ.ಎಂ. 3100 ಫಾರ್ಗೋ ವ್ಯಾನ್ (ಮಾಡಲ್ 1972) ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ಟೆಂಡರ್ ಕಂ ಬಹಿರಂಗ ಹರಾಜು (ಟೆಂಡರ್ ಕಂ ಆಕ್ಷನ್) ಮೂಲಕ ದಿನಾಂಕ: 9.8.2005 ರಂದು ಬೆಳಗ್ಗೆ 10-30 ಗಂಟೆಗೆ ಎಪಿಟಿಎಸ್, ಯಲಹಂಕ, ಬಳ್ಳಾರಿ ರಸ್ತೆ, ಬೆಂಗಳೂರು-63, ಇಲ್ಲಿ ಈ ಕೆಳಗೆ ನಮೂದಿಸಿದ ಷರತ್ತುಗಳ ಮೇಲೆ ದರಖಾಸ್ತು ಸಹಿತ ಹರಾಜು ಮಾಡಲಾಗುವುದು.

**ಹರಾಜಿನ ಷರತ್ತು ಮತ್ತು ನಿಬಂಧನೆಗಳು**

1. ಮೊಹರ್ ದರಖಾಸ್ತುಗಳನ್ನು ಪ್ರಿನ್ಸಿಪಾಲ್, ಎಪಿಟಿಎಸ್, ಐ.ಎ.ಎಫ್. ಪೋಸ್ಟ್, ಯಲಹಂಕ, ಬೆಂಗಳೂರು-63 ವಿಳಾಸಕ್ಕೆ ಕಳುಹಿಸತಕ್ಕದ್ದು. ಲಕೋಟೆಯ ಮೇಲೆ ನಿರುಪಯುಕ್ತ ವಾಹನ ಸಂಖ್ಯೆ ಎಂ.ಇ.ಎಂ. 3100 ಫಾರ್ಗೋ ವ್ಯಾನ್‌ನ ಖರೀದಿಗಾಗಿ ಎಂದು ನಮೂದಿಸಿ ಕಳುಹಿಸಿಕೊಡಬೇಕು.
2. ಬೆಲೆಯನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಬರೆದಿರತಕ್ಕದ್ದು.
3. ಹರಾಜುದಾರರು ರೂ.3000-00 (ರೂ. ಮೂರು ಸಾವಿರ ಮಾತ್ರ) ಠೇವಣಿಯನ್ನು ಹರಾಜು ಪ್ರಾರಂಭವಾಗುವುದಕ್ಕಿಂತ ಮುಂಚಿತವಾಗಿ ಎಪಿಟಿಎಸ್, ಯಲಹಂಕ, ಬೆಂಗಳೂರು, ಇವರಲ್ಲಿ ಆಗಲಿ ಅಥವಾ ಇವರಿಂದ ನೇಮಕವಾದಂತ ಹರಾಜು ಮಾಡುವ ಅಧಿಕಾರಿಯವರಲ್ಲಿ ಸಂಚಕಾರವಾಗಿ ಇಡಬೇಕು. ಠೇವಣಿ ಹಣಕ್ಕೆ ಯಾವುದೇ ಬಡ್ಡಿ ನೀಡಲಾಗುವುದಿಲ್ಲ.
4. ವಾಹನವನ್ನು ಅತೀ ಹೆಚ್ಚಿನ ಮೌಲ್ಯದಲ್ಲಿ ಕೂಗಿದಹರಾಜಿನವರಿಗೆ/ಟೆಂಡರ್‌ದಾರರಿಗೆ ವ್ಯಾನನ್ನು ಕೊಡಲಾಗುವುದು.
5. ಲೀಲಾವಿನ ಹಣವನ್ನು ಖರೀದಿದಾರರು ವಾಹನವನ್ನು ಖರೀದಿಸಿದ ದಿನದಂದೇ ಹರಾಜು ಯಾಲಂ ಆದ ಮೊತ್ತದ ಶೇ.50 ಪಾವತಿ ಮಾಡಬೇಕು, ಒಂದು ವೇಳೆ ಹಣ ಕಟ್ಟದಿದ್ದಲ್ಲಿ ಖರೀದಿಸಿದ ವ್ಯಾನನ್ನು ಪುನಃ ಅಂದೇ ಹರಾಜು ಮಾಡಲಾಗುವುದು. ಒಂದು ವೇಳೆ ತರುವಾಯದ ವಿಕ್ರಯ ಧನ ಮೊದಲಿನ ಲೀಲಾವಿನಕ್ಕಿಂತ ಕಡಿಮೆಯಾದಲ್ಲಿ ತಪ್ಪಿತಸ್ಥರಾದ ಮೊದಲಿನ ಖರೀದಿದಾರರು ಭಿನ್ನತೆಯನ್ನು ಸರಿಪಡಿಸಿ ಕೊಡಬೇಕು.
6. ಹರಾಜು ಮಾಡುವ ಅಧಿಕಾರಿಯು ಯಾವುದೇ ಕಾರಣಕ್ಕಾಗಿ ಲೀಲಾವನ್ನು ಮುನ್ಸೂಚನೆಯಿಲ್ಲದೆ ಹಸ್ತಾಂತರ ಮಾಡಲು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಪಡೆದಿರುತ್ತಾರೆ.
7. ನಿರುಪಯುಕ್ತ ವ್ಯಾನ್‌ನ್ನು ಖರೀದಿ ಮಾಡುವ ಹಣದ ಮೇಲೆ ಪ್ರಚಲಿತ ಸರ್ಕಾರಿ ಕಾಯ್ದೆಯಂತೆ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯನ್ನು ಲೀಲಾವಿನ ಹಣದ ಜೊತೆಯಲ್ಲಿಯೇ ವಸೂಲಿ ಮಾಡಲಾಗುವುದು.
8. ವಾಹನವನ್ನು ಖರೀದಿ ಮಾಡಿದವರೇ ತಮ್ಮ ಲೀಲಾವಿನ ಪೂರ್ಣ ಮೊತ್ತದ ಹಣವನ್ನು ಕಟ್ಟಿದ ನಂತರ ಸ್ಥಳದಿಂದ ವ್ಯಾನ್‌ನ್ನು ಸಾಗಿಸುವ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು.
9. ಸಂಚಕಾರವಾಗಿಟ್ಟ ರೂ. 3,000-00 (ರೂಪಾಯಿ ಮೂರು ಸಾವಿರ ಮಾತ್ರ) ಗಳನ್ನು ಅಯಶಸ್ವಿಯಾದ ಖರೀದಿದಾರರಿಗೆ ಲೀಲಾವು ಮುಗಿದ ನಂತರ ಅದೇ ದಿನದಂದು ವಾಪಸ್ಸು ಮಾಡಲಾಗುವುದು.
10. ಸರ್ಕಾರದ ವಸ್ತುಗಳ ಹರಾಜಿನಲ್ಲಿ ಭಾಗೀದಾರರಾಗಿರುವವರೆಲ್ಲರೂ ಸರ್ಕಾರದ ನಿಯಮಗಳನ್ನು ವಿಶ್ವಾಸಿಯಾಗಿ ಪರಿಪಾಲಿಸಬೇಕು.
11. ಈ ಲೀಲಾವಿನಲ್ಲಿ ಏನಾದರೂ ವ್ಯತ್ಯಾಸ ಮತ್ತು ಇತರೆ ತೊಂದರೆ ಉದ್ಭವಿಸಿದಲ್ಲಿ ಮಾನ್ಯ ಡಿ.ಜಿ.ಐ. ತರಬೇತಿ, ಅಥವಾ ಡಿ.ಜಿ. ಅಂಡ್ ಐಜಿಪಿ., ಕರ್ನಾಟಕ ರಾಜ್ಯ, ಬೆಂಗಳೂರು, ಇವರ ಆದೇಶವೇ ಅಂತಿಮ ಆದೇಶವಾಗಿರುತ್ತದೆ. ಲೀಲಾವು ಮಾಡಿದ ನಂತರ ಕೇಂದ್ರ ಕಛೇರಿಯ ಒಪ್ಪಿಗೆಯನ್ನು ಪಡೆದು ವಾಹನವನ್ನು ಸಂಬಂಧಪಟ್ಟ ಹೆಚ್ಚಿನ ಬಿಡ್ಡರ್‌ಗೆ ನೀಡಲಾಗುವುದು.
12. ಸದರಿ ಮೊಹರ್ ದರಖಾಸ್ತುಗಳನ್ನು ಕಛೇರಿಯ ವೇಳೆಯಲ್ಲಿ ದಿನಾಂಕ:8.8.2005ರ ಸಾಯಂಕಾಲ 5 ಗಂಟೆಯವರೆಗೆ ಸ್ವೀಕರಿಸಲಾಗುವುದು, ನಂತರ ದರಖಾಸ್ತುಗಳನ್ನು ಯಾವುದೇ ಕಾರಣಕ್ಕೂ ಸ್ವೀಕರಿಸಲಾಗುವುದಿಲ್ಲ.
13. ಸದರಿ ಲೀಲಾವಿಗೆ ಸಂಬಂಧಪಟ್ಟಂತೆ ನಿರುಪಯುಕ್ತ ವ್ಯಾನ್ ಅನ್ನು ಪೊಲೀಸ್ ಅಧೀಕ್ಷಕರು ಮತ್ತು ಪ್ರಾಂಶುಪಾಲರು, ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಇವರ ಕಛೇರಿಯಲ್ಲಿ ಸಮಯ ಬೆಳಿಗ್ಗೆ 10 ಗಂಟೆಯಿಂದ 5 ಗಂಟೆ ಅವಧಿಯಲ್ಲಿ ನೋಡಿಕೊಳ್ಳಬಹುದು.
14. ವಾಹನವು ಯಾವ ಸ್ಥಿತಿಯಲ್ಲಿ ಇದೆಯೋ ಅದೇ ಸ್ಥಿತಿಯಲ್ಲಿ ಹಸ್ತಾಂತರಗೊಳಿಸಲಾಗುವುದು.
15. ಅಂಚೆಯಲ್ಲಿ ದರಖಾಸ್ತು ಕಳುಹಿಸುವವರು ರೂ.3,000-00 ಡಿ.ಡಿಯನ್ನು ಪ್ರಿನ್ಸಿಪಾಲ್, ಎ.ಪಿ.ಟಿ.ಎಸ್. ಯಲಹಂಕ, ಇವರ ಹೆಸರಿನಲ್ಲಿ ಕಳುಹಿಸತಕ್ಕದ್ದು.
16. ಈ ಕುರಿತು ಏನಾದರೂ ಹೆಚ್ಚಿನ ವಿವರ ಬೇಕಾದಲ್ಲಿ ಕಛೇರಿಯ ವೇಳೆಯಲ್ಲಿ ಮಾನ್ಯ ಪೊಲೀಸ್ ಅಧೀಕ್ಷಕರು ಮತ್ತು ಪ್ರಾಂಶುಪಾಲರು, ಎ.ಪಿ.ಟಿ.ಎಸ್. ಯಲಹಂಕ, ಇವರನ್ನು ಭೇಟಿಯಾಗಿ ಪಡೆದುಕೊಳ್ಳಬಹುದು.
17. ಲೀಲಾವಿನಲ್ಲಿ ಭಾಗವಹಿಸಲಿಚ್ಚಿಸುವವರು ಯಾವುದೇ ತರಹದ ಚೆಕ್ಕನ್ನು, ಕ್ರೆಡಿಟ್ ಕಾರ್ಡ್ ಕೊಟ್ಟಲ್ಲಿ ಅಂಗೀಕರಿಸಿಕೊಳ್ಳಲಾಗುವುದಿಲ್ಲ.
18. ಮೊಹರ್ ದರಖಾಸ್ತುಗಳನ್ನು ಟೆಂಡರ್‌ನಲ್ಲಿ ಭಾಗವಹಿಸುವವರ ಸಮಕ್ಷಮದಲ್ಲಿ ಬಹಿರಂಗ ಹರಾಜು ಮುಗಿದ ನಂತರ ತೆರೆಯಲಾಗುವುದು.
19. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸಲು ಸಂಚಕಾರವಾಗಿಟ್ಟವರನ್ನು ಮಾತ್ರ ಹರಾಜು ಕೂಗಲು ಅನುಮತಿಸಲಾಗುವುದು. ಬೇರೆಯವರು ಭಾಗವಹಿಸುವುದನ್ನು ನಿಷೇಧಿಸಿದೆ.

20. ಟೆಂಡರ್ ಹಾಕಿದವರು ಸಹ ಹರಾಜಿನಲ್ಲಿ ಭಾಗವಹಿಸಬೇಕಾದರೆ ಮುಂಗಡ ಸಂಚಕಾರವಾಗಿ ರೂ. 3,000=00 ಗಳನ್ನು ಪಾವತಿಸಿಯೇ ಹರಾಜಿನಲ್ಲಿ ಭಾಗವಹಿಸತಕ್ಕದ್ದು.

ಎಸ್.ಪಿ. ಮತ್ತು ಪ್ರಾಂಶುಪಾಲರು,
ಸಶಸ್ತ್ರ ಪೊಲೀಸ್ ತರಬೇತಿ ಶಾಲೆ, ಯಲಹಂಕ, ಬೆಂಗಳೂರು.

ಪಿ.ಆರ್. 372

## ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಚಳ್ಳಕೆರೆ

## ಪ್ರಕಟಣೆ ಸಂ.ಸಕೃನಿ/ಚ/ಲೆಕ್ಕ-2/ಜಡವಸ್ತು/ವಿಲೇ/2004-05, ದಿನಾಂಕ: 28ನೇ ಮೇ 2005

**ವಿಷಯ:** ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆ ಕಛೇರಿಯ ಅನುಪಯುಕ್ತ ವಸ್ತುಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆ ಕಛೇರಿಯಲ್ಲಿ ಲಭ್ಯವಿರುವ ಈ ಕೆಳಕಂಡ ಕ್ರ.ಸಂ. 1 ರಿಂದ 17 ರವರೆಗಿನ ಅನುಪಯುಕ್ತ ವಸ್ತುಗಳನ್ನು ಕೆಳಕಂಡ ನಿಬಂಧನೆಗೊಳಪಟ್ಟು ಸದರಿ ಕಛೇರಿಯ ಆವರಣದಲ್ಲಿ ವಸ್ತುಗಳು ಯಾವ ರೀತಿಯಲ್ಲಿ ಇದೆಯೋ ಅದೇ ರೀತಿಯಲ್ಲಿ ದಿನಾಂಕ:14.7.2005 ರಂದು ಮಧ್ಯಾಹ್ನ 3.00 ಗಂಟೆಗೆ ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲಾಗುವುದು. ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಭಾಗವಹಿಸಲು ಈ ಮೂಲಕ ಕೋರಲಾಗಿದೆ.

**ಅನುಪಯುಕ್ತ ವಸ್ತುಗಳ ಪಟ್ಟಿ**

| ಕ್ರ. ಸಂ. | ದಾಸ್ತಾನು ವಸ್ತುಗಳು | ಪರಿಮಾಣ | ಕ್ರ. ಸಂ. | ದಾಸ್ತಾನು ವಸ್ತುಗಳು | ಪರಿಮಾಣ |
|---|---|---|---|---|---|
| 1. | ಪಿಕಾಶಿ | 90 | 2. | ಬಾಣಲಿ | 112 |
| 3. | ಚಲಿಕೆ | 82 | 4. | ಹ್ಯಾಂಡ್ಸ್ | 20 |
| 5. | ಕ್ಯಾಷ್ ಬಾಕ್ಸ್ | 2 | 6. | ಗೋಡೆ ಗಡಿಯಾರ | 1 |
| 7. | ಅಲಾರಾಮ್ | 5 | 8. | ಲಾಟೀನ್ | 2 |
| 9. | ಬಕೇಟ್ | 4 | 10. | ಹಿತ್ತಾಳೆ ಕೊಳಗ | 2 |
| 11. | ಹಿತ್ತಾಳೆ ಕೊಡ | 1 | 12. | ಹಿತ್ತಾಳೆ ತಂಬಿಗೆ | 1 |
| 13. | ಟಪಾಲು ತಕ್ಕಡಿ | 2 | 14. | ಬೀಗಗಳು | 20 |
| 15. | ವುಡನ್ ಸ್ಟೂಲ್ | 1 | 16. | ಸ್ಟೀಲ್ ತಂಬಿಗೆ | 4 |
| 17. | ಸ್ಟೀಲ್ ಸ್ಟೂಲ್ | 1 | | | |

**ನಿಬಂಧನೆಗಳು**

1) ಹರಾಜಿನಲ್ಲಿ ಪಾಲ್ಗೊಳ್ಳಲು ಇಚ್ಛೆಯುಳ್ಳವರು ರೂ.500/- ನ್ನು ಮುಂಗಡ ಠೇವಣಿಯಾಗಿ ಹರಾಜಿನ ದಿನ ಬೆಳಿಗ್ಗೆ 10 ಘಂಟೆಯಿಂದ 11 ಘಂಟೆಯೊಳಗೆ ಕಟ್ಟಬೇಕು.
2) ಯಶಸ್ವಿ ಬಿಡ್ ದಾರರು ಮಾರಾಟ ತೆರಿಗೆಯನ್ನು ಸರ್ಕಾರದ ನಿಯಮದಂತೆ ಪಾವತಿ ಮಾಡತಕ್ಕದ್ದು.
3) ಹರಾಜಿಗೆ ಇಟ್ಟ ವಸ್ತುಗಳನ್ನು ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆಯಲ್ಲಿ ಕಛೇರಿಯ ದಿನಗಳಂದು ಪರೀಕ್ಷಿಸಬಹುದು.
4) ಜಯಪ್ರದವಾದ ಹರಾಜು ನಿರ್ಣಯವನ್ನು ಅತ್ಯುನ್ನತ ಹರಾಜು ಬೆಲೆಯ ಮೇಲೆ ನಿರ್ಣಯಿಸಲಾಗುವುದು.
5) ಹರಾಜಿನ ಪ್ರಕಟಣೆಯಲ್ಲಿ ಯಾವುದೇ ವಿವಾದವಾದ ಪಕ್ಷದಲ್ಲಿ ಹರಾಜನ್ನು ತಿರಸ್ಕರಿಸುವ ಮುಂದುವರೆಸುವ ಹಾಗೂ ರದ್ದುಪಡಿಸುವ ಹಕ್ಕುಗಳು ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆ ಇವರಿಗೆ ಇರುತ್ತದೆ.
6) ಹರಾಜಿನ ಎಲ್ಲಾ ವಿಷಯಗಳಲ್ಲಿ ಸಹಾಯಕ ಕೃಷಿ ನಿರ್ದೇಶಕರು, ಚಳ್ಳಕೆರೆ ಇವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ. ಮತ್ತು ಭಾಗವಹಿಸುವ ಹರಾಜಿನ ಬಿಡ್ದುದಾರರು ಈ ತೀರ್ಮಾನಕ್ಕೆ ಬದ್ಧರಾಗಿರಬೇಕಾಗುತ್ತದೆ.
7) ಹರಾಜಿಗೆ ಸಂಬಂಧಿಸಿದಂತೆ ಜಂಟಿ ಕೃಷಿ ನಿರ್ದೇಶಕರು, ಚಿತ್ರದುರ್ಗ ಅವರ ಅನುಮೋದನೆ ಪಡೆದ ನಂತರ ಹೆಚ್ಚು ಬಿಡ್ ಮಾಡಿದ ಹರಾಜುದಾರರು ನಿಗದಿತ 7 ದಿನಗಳೊಳಗಾಗಿ ಪೂರ್ತಿ ಹಣವನ್ನು ತೆರಿಗೆ ಸಹಿತ ನಗದು ರೂಪದಲ್ಲಿ ಪಾವತಿ ಮಾಡಿ ವಸ್ತುಗಳನ್ನು ಅವರ ಸ್ವಂತ ಖರ್ಚಿನಲ್ಲಿ ಹರಾಜಿನ ಸ್ಥಳದಿಂದ ತೆಗೆದುಕೊಂಡು ಹೋಗತಕ್ಕದ್ದು. ಯಾವ ಕಾರಣದಿಂದಲೂ ಈ ಅವಧಿಯನ್ನು ವಿಸ್ತರಿಸಲಾಗುವುದಿಲ್ಲ. ಈ ನಿಯಮವನ್ನು ಪಾಲಿಸದಿದ್ದಲ್ಲಿ ಅವರ ಮುಂಗಡ ಠೇವಣಿ ಹಣವನ್ನು ಸರ್ಕಾರದ ಖಾತೆಗೆ ಯಾವ ರೀತಿಯ ತಿಳುವಳಿಕೆ ಕೊಡದೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
8) ಜಯಶೀಲರಾದ ಹರಾಜುದಾರರನ್ನುಳಿದು ಉಳಿದ ಬಿಡ್‌ದಾರರ ಮುಂಗಡ ಠೇವಣಿಗಳನ್ನು ಹರಾಜಿನ ಅನಂತರ ಹಿಂತಿರುಗಿಸಲಾಗುವುದು.

ಸಹಾಯಕ ಕೃಷಿ ನಿರ್ದೇಶಕರು,
ಚಳ್ಳಕೆರೆ.

ಪಿ.ಆರ್. 374

## ಕರ್ನಾಟಕ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ

## ಅಲ್ಪಾವಧಿ ಮರು ಟೆಂಡರ್ ಪ್ರಕಟಣೆ

## (ದ್ವಿ-ಲಕೋಟೆ ಪದ್ಧತಿ)

## ಟೆಂಡರ್ ಪ್ರಕಟಣೆ ಸಂಖ್ಯೆ: 01/05-06, ದಿನಾಂಕ: 28ನೇ ಜೂನ್ 2005

**ಉಲ್ಲೇಖ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ (ದ), ಬೆಂಗಳೂರು, ಇವರ ಪತ್ರ ಸಂಖ್ಯೆ:ಮು.ಇಂ./ಸನೀ(ದ)/ಬೆಂ/ ಶಿವಮೊಗ್ಗ-ಸೊರಬ-ಮುಗೂರು-20:05-06/1226 ದಿನಾಂಕ: 27.6.2005.

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗೆ ಐಟಂವಾರು ಅಲ್ಪಾವಧಿ ಮರುಟೆಂಡರನ್ನು ದ್ವಿ-ಲಕೋಟೆ ಪದ್ಧತಿಯಲ್ಲಿ, ದ್ವಿಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಆಧ್ಯಾದೇಶ-1999, 2000 ಮತ್ತು ಆ್ಯಕ್ಟ್-2000ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ.

1. ಗುತ್ತಿಗೆದಾರರು ತಾಂತ್ರಿಕ ಬಿಡ್‌ನ್ನು ದ್ವಿಪತ್ರಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆಯ ಮೇಲೆ ತಾಂತ್ರಿಕ ಬಿಡ್ ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.
2. ಗುತ್ತಿಗೆದಾರರು ಆರ್ಥಿಕ ಬಿಡ್‌ನ್ನು ದ್ವಿಪತ್ರಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಷೆಡ್ಯೂಲ್-ಬಿ ನಲ್ಲಿ ದರಗಳನ್ನು ನಿಗದಿತ ರೀತಿಯಲ್ಲಿ ಭರ್ತಿ ಮಾಡಿ ಲಕೋಟೆಯಲ್ಲಿ ಮೊಹರು ಮಾಡಿ ಲಕೋಟೆಯ ಮೇಲೆ ಆರ್ಥಿಕ ಬಿಡ್ ಎಂದು ನಮೂದಿಸಿ ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ತಾಂತ್ರಿಕ ಬಿಡ್ ಲಕೋಟೆ ಮತ್ತು ಆರ್ಥಿಕ ಬಿಡ್ ಲಕೋಟೆ ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿಯ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ, ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರ ಕಾರ್ಯಾಲಯದಲ್ಲಿ, ಈ ಕೆಳಗೆ ಸೂಚಿಸಿರುವ ದಿನಾಂಕದಂದು ಸಾಯಂಕಾಲ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರುದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ರಜಾ ದಿನವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು.

ತಾಂತ್ರಿಕ ಬಿಡ್‌ನ್ನು ಮೊದಲು ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ತಾಂತ್ರಿಕ ಬಿಡ್‌ಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ತಿಳಿಸಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅನರ್ಹರಾದ ಗುತ್ತಿಗೆದಾರರ ಆರ್ಥಿಕ ಬಿಡ್ ತೆರೆಯಲಾಗುವುದಿಲ್ಲ. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

| | | | |
|---|---|---|---|
| 1. | ಟೆಂಡರ್ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | : | 20.7.2005ರ ಸಂಜೆ 5.00 ಗಂಟೆಯವರೆಗೆ |
| 2. | ಖಾಲಿ ಟೆಂಡರ್-ಫಾರಂಗಳನ್ನು ಕೊಡುವ ದಿನಾಂಕ | : | 25.7.2005ರ ಸಂಜೆ 5.00 ಗಂಟೆಯವರೆಗೆ ಕೊಡಲಾಗುವುದು. |
| 3. | ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ದಿನಾಂಕ (ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಒಳಗೊಂಡಂತೆ) | : | 03.08.2005ರ ಸಂಜೆ 4.00 ಗಂಟೆಯೊಳಗೆ ಸಲ್ಲಿಸುವುದು. |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್ ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರಂ ಬೆಲೆ ದರ್ಜೆ (ಹಿಂದಿರುಗಿಸಲಾರದಂಥದ್ದು) (ತೆರಿಗೆ ಸೇರಿ) | ಗುತ್ತಿಗೆದಾರರ ದರ್ಜೆ | ಕಾಲಮಿತಿ (ಮಳೆಗಾಲ ಸೇರಿ) |
|---|---|---|---|---|---|---|
| 1. | ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕು ಮೂಗೂರು ಗ್ರಾಮದ ಹತ್ತಿರ ವರದಾ ನದಿಗೆ ಅಡ್ಡಲಾಗಿ ನಿರ್ಮಿಸುವ ಸೇತುವೆ ಸಹಿತ ಬ್ಯಾರೇಜು ನಿರ್ಮಾಣ (ನಬಾರ್ಡ್ ಅಡಿಯಲ್ಲಿ) | 364.056 | 3,64,056.00 | 15,000.00 | ಒಂದನೇ ದರ್ಜೆ | 18 ತಿಂಗಳು |

**ಅರ್ಜಿ ಸಲ್ಲಿಸುವ ವಿಧಾನ:**

ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳನ್ನು ಪಡೆಯುವ ಸಲುವಾಗಿ ಅರ್ಜಿ ಸಲ್ಲಿಸುವಾಗ ಈ ಕೆಳಗೆ ತೋರಿಸಿದ ಮೂಲ ಪ್ರಮಾಣ ಪತ್ರಗಳನ್ನು ತೋರಿಸಿ ಪರಿಶೀಲಿಸಿಕೊಂಡು ಅರ್ಜಿಯೊಂದಿಗೆ ನಕಲು ಪ್ರತಿಗಳನ್ನು ಲಗತ್ತಿಸುವುದು.

1. ಕೆ.ಪಿ.ಡಬ್ಲ್ಯೂ.ಡಿ. ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
2. ಇತ್ತೀಚಿನ ವರಮಾನ ತೆರಿಗೆಯ ಕ್ಲಿಯರೆನ್ಸ್ ಪ್ರಮಾಣ ಪತ್ರ.
3. ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯ ಕ್ಲಿಯರೆನ್ಸ್ ಪ್ರಮಾಣ ಪತ್ರ.
4. ಈ ಕಾಮಗಾರಿಗೆ ಭಾಗವಹಿಸುವ ಗುತ್ತಿಗೆದಾರರು ಕೆಲಸಕ್ಕೆ ಅವಶ್ಯಕವಾದ ಈ ಕೆಳಕಂಡ ಯಂತ್ರೋಪಕರಣಗಳನ್ನು ಹೊಂದಿರಬೇಕು. (ಸ್ವಂತ ಅಥವಾ ಲೀಸ್)

| | | |
|---|---|---|
| a. | ಎಕವೇಟರ್/ಪೋಕ್ಲೇನ್ (0.90 ಘಮೀ ಸಾಮರ್ಥ್ಯ) | 2 ನಂ |
| b. | ಲಾರಿಗಳು / ಟಿಪ್ಪರ್‌ಗಳು | 8 ನಂ |
| c. | ಕಂಪ್ರೆಸ್ಸರ್ / ವ್ಯಾಗನ್ ಡ್ರಿಲರ್ | 2 ನಂ |
| d. | ಕಾಂಕ್ರೀಟ್ ಮೆಶಿನ್ ಮಿಕ್ಸರ್ (10/7 ಘ.ಫೀಟ್ ಸಾಮರ್ಥ್ಯ) | 6 ನಂ |
| e. | ವೈಬ್ರೇಟರ್ | 10 ನಂ |
| f. | ಪಂಪ್ ಸೆಟ್ (5 ಹೆಚ್.ಪಿ.) | 4 ನಂ |
| g. | ಪಂಪ್ ಸೆಟ್ (10 ಹೆಚ್.ಪಿ.) | 4 ನಂ. |
| h. | ಸೆಂಟ್ರಿಂಗ್ ಸಾಮಗ್ರಿಗಳು (ಕಾಂಕ್ರೀಟ್ ಕೆಲಸ) | 1600 ಘಮೀ ಪ್ರತಿದಿನಕ್ಕೆ |

5. ಬ್ಯಾರೇಜ್-ಕಮ್-ಬ್ರಿಡ್ಜ್ ಅಥವಾ ಇದೇ ಮಾದರಿಯ ಒಂದು ಕಾಮಗಾರಿಯನ್ನು ಈ ಕಾಮಗಾರಿಗೆ ನಿರ್ದಿಷ್ಟಪಡಿಸಿದ ಮೊತ್ತದ ಕನಿಷ್ಠ 50% ರಷ್ಟು ಮೊತ್ತಕ್ಕೆ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಈ ಹಿಂದಿನ ಐದು ವರ್ಷಗಳ ಬ್ಲಾಕ್ ಕಾಲಾವಕಾಶದಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸುವುದು.

**ಖಾಲಿ ಟೆಂಡರ್ ಫಾರಂಗಳಿಗೆ ಹಣ ಸಂದಾಯ ಮಾಡುವ ವಿಧಾನ:-**

ಡಿ.ಡಿ. ಅಥವಾ ಬ್ಯಾಂಕ್‌ನ ಚೆಕ್ಕನ್ನು ಕಾರ್ಯಪಾಲಕ ಇಂಜಿನಿಯರರು, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು. ಮೊದಲು ನೀಡಿದ ಟೆಂಡರ್ ಕರೆಗೆ ಸ್ಪಂದಿಸಿ ಅರ್ಜಿ ಸಲ್ಲಿಸಿದ ಗುತ್ತಿಗೆದಾರರು ಈಗಿನ ಮರು ಟೆಂಡರ್ ಪ್ರಕಟಣೆಯ ನಿಯಮಾವಳಿಗಳ / ಷರತ್ತುಗಳಂತೆ ಮರು ಅರ್ಜಿ ಸಲ್ಲಿಸಬೇಕು. ಟೆಂಡರ್ ಫಾರಂಗಳಿಗಾಗಿ ಮೊದಲು ಸಲ್ಲಿಸಿದ ಹಣವನ್ನು ಪರಿಗಣಿಸಲಾಗುವುದು.

**ಇ.ಎಂ.ಡಿ. ಸಲ್ಲಿಸುವ ವಿಧಾನ:**

ನಿಗದಿತ ಇ.ಎಂ.ಡಿ. ಯನ್ನು ಕಡ್ಡಾಯವಾಗಿ ರಾಷ್ಟ್ರೀಕೃತ ಬ್ಯಾಂಕಿನ ಡಿಡಿ/ಪೇ ಆರ್ಡರ್/ಎಫ್‌ಡಿಆರ್ ರೂಪದಲ್ಲಿ ಸಲ್ಲಿಸಬಹುದು. ಎನ್.ಎಸ್.ಸಿ.ಗಳನ್ನು ಸಲ್ಲಿಸಿದ್ದೇ ಆದಲ್ಲಿ ಗುತ್ತಿಗೆದಾರರು ಎನ್.ಎಸ್.ಸಿ.ಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರಬೇಕು. ಹಾಗೂ ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿಡಿ/ಪೇ ಆರ್ಡರ್/ಎಫ್‌ಡಿಆರ್ ರೂಪದಲ್ಲಿ ಸಲ್ಲಿಸಿದರೆ, ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಪಡೆದು, ಟೆಕ್ನಿಕಲ್ ಬಿಡ್‌ನ ಲಕೋಟೆಯಲ್ಲಿ ಲಗತ್ತಿಸಿರಬೇಕು. ಯಾವುದೇ ಕಾರಣಕ್ಕೂ ಬ್ಯಾಂಕ್ ಗ್ಯಾರಂಟಿ ಪರಿಗಣಿಸುವುದಿಲ್ಲ. ಇ.ಎಂ.ಡಿ. ಯನ್ನು ಟೆಂಡರ್ ಸ್ವೀಕರಿಸಿದ ದಿನಾಂಕದಿಂದ 180 ದಿನಗಳ ಅವಧಿಗೆ ಮಾನ್ಯತೆ ಹೊಂದಿರಬೇಕು.

**ತಾಂತ್ರಿಕ (ಟೆಕ್ನಿಕಲ್) ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:-**

1. ಇ.ಎಂ.ಡಿ.
2. ಬ್ಯಾರೇಜ್-ಕಮ್-ಬ್ರಿಡ್ಜ್ ಅಥವಾ ಇದೇ ಮಾದರಿಯ ಒಂದು ಕಾಮಗಾರಿಯನ್ನು ಈ ಕಾಮಗಾರಿಗೆ ನಿರ್ದಿಷ್ಟಪಡಿಸಿದ ಮೊತ್ತದ ಕನಿಷ್ಠ 50% ರಷ್ಟು ಮೊತ್ತಕ್ಕೆ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಈ ಹಿಂದಿನ ಐದು ವರ್ಷಗಳ ಬ್ಲಾಕ್ ಕಾಲಾವಧಿಯಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಕಾರ್ಯಪಾಲಕ ಇಂಜಿನಿಯರ್ ಇವರ ಹುದ್ದೆಗಿಂತ ಕಡಿಮೆ ಇರದ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸುವುದು.
3. ತಾಂತ್ರಿಕ ಬಿಡ್‌ನಲ್ಲಿರುವ ನಮೂನೆ (1) ರಿಂದ (8)ಗಳನ್ನು ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ದೃಢೀಕರಿಸಬೇಕು.
4. ಯಂತ್ರೋಪಕರಣಗಳ ಬಗ್ಗೆ ನಮೂನೆ-5 ರಲ್ಲಿ ವಿವರಗಳನ್ನು ನೀಡಿ ದೃಢೀಕರಿಸಿರಬೇಕು ಹಾಗೂ ಯಂತ್ರೋಪಕರಣಗಳ ಮಾಲೀಕತ್ವ (ಸ್ವಂತ ಅಥವಾ ಲೀಸ್) ಹೊಂದಿದ ವಿವರಗಳನ್ನೊಳಗೊಂಡ ಮೂಲ ದಾಖಲೆಗಳನ್ನು ಸಲ್ಲಿಸಬೇಕು. ಲೀಸ್ ಆಗಿದ್ದಲ್ಲಿ ಜನರಲ್ ಪವರ್ ಆಫ್ ಅಟಾರ್ನಿ ಜೊತೆಗೆ ಮೂಲ ದಾಖಲಾತಿ ಒದಗಿಸುವುದು.

**ಆರ್ಥಿಕ ಬಿಡ್ ಲಕೋಟೆಯಲ್ಲಿ ಒದಗಿಸಬೇಕಾದ ವಿವರಗಳು:-**

1. ಶೆಡ್ಯೂಲ್-ಬಿ ಯನ್ನು ದ್ವಿ ಪತ್ರಿಯಲ್ಲಿ ಅಂಕಿ ಮತ್ತು ಅಕ್ಷರಗಳಲ್ಲಿ ದರಗಳನ್ನು ಹಾಗೂ ಮೊತ್ತವನ್ನು ನಮೂದಿಸಿ, ತಿದ್ದುಪಡಿ ಮಾಡಿರುವುದನ್ನು ಸಹಿಯೊಂದಿಗೆ ದೃಢೀಕರಿಸಬೇಕು.
2. ಪಿ.ಡಬ್ಲ್ಯೂ.ಜಿ-65 ಮತ್ತು 66 ಇವುಗಳನ್ನು ಹಾಗೂ ಇದರ ಅಡಕಗಳನ್ನು ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ಸಹಿ ಮಾಡಿರಬೇಕು.

**ಷರತ್ತುಗಳು:-**

1. ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಮತ್ತು ಇಲಾಖಾವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ. ಗುತ್ತಿಗೆದಾರರು ಐ.ಎಸ್. ಸ್ಟಾಂಡರ್ಡ್ ಸಾಮಗ್ರಿಗಳನ್ನು ಖರೀದಿಸಬೇಕು. ಸಾಮಗ್ರಿಗಳ ಗುಣಮಟ್ಟವನ್ನು ಸಕ್ಷಮ ಗುಣ ನಿಯಂತ್ರಣ ಪ್ರಾಧಿಕಾರದವರಿಂದ ಪರೀಕ್ಷೆ ಮಾಡಿಸಿ, ಗುಣ ಮಟ್ಟದ ಬಗ್ಗೆ ಪ್ರಮಾಣ ಪತ್ರ ಒದಗಿಸತಕ್ಕದ್ದು.
2. ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೊಂದಣಿ ಪ್ರಮಾಣ ಪ್ರತಿ ಲಗತ್ತಿಸತಕ್ಕದ್ದು.
3. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೊಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸತಕ್ಕದ್ದು.
4. ಸತತವಾಗಿ 3 ಬಾರಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
5. ಕಾಮಗಾರಿಯನ್ನು ಉಪಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
6. ಈ ವಿಭಾಗದಲ್ಲಿ ಹಿಂದೆ ನಿಗದಿತ ಸಮಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸದ ಗುತ್ತಿಗೆದಾರರಿಂದ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.
7. ಗುತ್ತಿಗೆದಾರರು ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪ್ರತಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.
8. ರಾಜ್ಯ ಮಾರಾಟ ತೆರಿಗೆಯಲ್ಲಿ ನೊಂದಣಿ ಸೂಚಿಸಿರುವ ಬಗ್ಗೆ ನೊಂದಣಿ ಪತ್ರದ ಪ್ರತಿ ಹಾಗೂ ಆದಾಯ ತೆರಿಗೆ ತೀರುವಳಿ ಪತ್ರವನ್ನು, ಅರ್ಜಿಯೊಂದಿಗೆ ಲಗತ್ತಿಸಬೇಕು.
9. ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಯನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು.
10. ಷರತ್ತುಗಳನ್ನೊಳಗೊಂಡ ಟೆಂಡರನ್ನು ಪರಿಗಣಿಸುವುದಿಲ್ಲ.
11. ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯಪಾಲಕ ಇಂಜಿನಿಯರರು, ಸಣ್ಣ ನೀರಾವರಿ ವಿಭಾಗ ಶಿವಮೊಗ್ಗ ರವರ ಕಛೇರಿಯ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು/ ತಿಳಿಸಲಾಗುವುದು.
12. ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಇಲಾಖೆಗೆ ಸಂಬಂಧಿಸಿದ ಅಧಿಕಾರಿಗಳು ಕಾಯ್ದಿರಿಸಿಕೊಂಡಿರುತ್ತಾರೆ.
13. ತಾಂತ್ರಿಕ ಬಿಡ್‌ನಲ್ಲಿ ವಿವರಗಳು ನಮೂದಿಸಲು ಸ್ಥಳಾವಕಾಶ ಕಡಿಮೆಯಾದಲ್ಲಿ ಹೆಚ್ಚುವರಿ ಪುಟಗಳನ್ನು ಬಳಸಬಹುದಾಗಿದೆ.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯನ್ನು ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

ಪಿ.ಆರ್. 375

ಕಾರ್ಯಪಾಲಕ ಇಂಜಿನಿಯರ್, ಸಣ್ಣನೀರಾವರಿ ವಿಭಾಗ, ಶಿವಮೊಗ್ಗ.

**ತೋಟಗಾರಿಕೆ ಇಲಾಖೆ**
**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-04**
**ಕಿರಣೆ ಸಸಿಗಳ ಸರಬರಾಜಿಗಾಗಿ ಅಲ್ಪಾವಧಿ ಟೆಂಡರ್ ಪ್ರಕಟಣೆ**
**ಸಂ:ತೋಇ:ತೋಅನಿ:ಕ್ಷೇಸ:ಸತೋಅ1:73:2004-2005, ದಿನಾಂಕ: 23ನೇ ಜೂನ್ 2005**

2005-2006ನೇ ಸಾಲಿಗೆ ತೋಟಗಾರಿಕೆ ಇಲಾಖೆಗೆ ಕಿರಣೆ ಸಸಿಗಳನ್ನು ಸರಬರಾಜು ಮಾಡಲು ನೈಜ ನರ್ಸರಿದಾರರಿಂದ ಟೆಂಡರ್ ಆಹ್ವಾನಿಸಲಾಗಿದೆ. ನಿಗದಿತ ಟೆಂಡರ್ ನಮೂನೆಯನ್ನು ತೋಟಗಾರಿಕೆ ಅಪರ ನಿರ್ದೇಶಕರು (ಕ್ಷೇತ್ರ / ಸಸ್ಯಾಗಾರ) ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ ರೂ. 100/- ಗಳನ್ನು ನಗದಾಗಿ ನೀಡಿ ಪಡೆಯಬಹುದು. ನಿಗದಿತ ಟೆಂಡರ್ ನಮೂನೆಯನ್ನು ನಿರ್ದೇಶನಾಲಯದಿಂದ ಪಡೆಯಲು ಕೊನೆಯ ದಿನಾಂಕ: 11.7.2005 ವೇಳೆ ಸಂಜೆ 4.00 ಘಂಟೆ ಮೊಹರಾದ ಟೆಂಡರ್ ಫಾರಂಅನ್ನು ಸದರಿ ದಿನವೇ ಸಂಜೆ 5.00 ಗಂಟೆಯ ಒಳಗೆ ಸಲ್ಲಿಸುವುದು. ಟೆಂಡರ್‌ದಾರರು ನಿಗದಿತ ನಮೂನೆಯ ಜೊತೆ ರೂ. 50,000/- ಗಳ ಮೊತ್ತದ ಭದ್ರತಾ ಠೇವಣಿಯನ್ನು ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ನಿರ್ದೇಶಕರು, ತೋಟಗಾರಿಕೆ ಇಲಾಖೆ, ಲಾಲ್‌ಬಾಗ್, ಬೆಂಗಳೂರು-560 004 ರವರ ಹೆಸರಿನಲ್ಲಿ ಪಡೆದು ಲಗತ್ತಿಸಿ ಸಲ್ಲಿಸಬೇಕು. ಮೊಹರಾದ ಟೆಂಡರ್‌ಗಳನ್ನು ದಿನಾಂಕ: 12.7.2005 ರಂದು ಬೆಳಿಗ್ಗೆ 11.00 ಗಂಟೆಗೆ ತೋಟಗಾರಿಕೆ ನಿರ್ದೇಶನಾಲಯ ಲಾಲ್‌ಬಾಗ್, ಬೆಂಗಳೂರಿನಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗೆ (ತೋಟಗಾರಿಕೆ ಅಪರ ನಿರ್ದೇಶಕರು (ಕ್ಷೇತ್ರ / ಸಸ್ಯಾಗಾರ) ರವರನ್ನು ಸಂಪರ್ಕಿಸುವುದು. (ದೂರವಾಣಿ ಸಂಖ್ಯೆ. 26564252)

ತೋಟಗಾರಿಕೆ ನಿರ್ದೇಶಕರು,
ಲಾಲ್‌ಬಾಗ್, ಬೆಂಗಳೂರು

ಪಿ.ಆರ್. 380

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ**

**ಟೆಂಡರ್ ಅಧಿಸೂಚನೆ ಸಂಖ್ಯೆ: ಸಿಆಸುಇ 72 ಡಿಸಭೆ 2005, ಬೆಂಗಳೂರು, ದಿನಾಂಕ: 29ನೇ ಜೂನ್ 2005**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಡೆಯುವ ಸಭೆಸಮಾರಂಭಗಳು ಮತ್ತು ರಾಜಭವನದಲ್ಲಿ ನಡೆಯುವ ಪ್ರತಿಜ್ಞಾ ಸ್ವೀಕಾರ ಸಮಾರಂಭ ಇತ್ಯಾದಿಗಳಿಗೆ ಧ್ವನಿವರ್ಧಕ ವ್ಯವಸ್ಥೆ, ಧ್ವನಿಮುದ್ರಿತ ಶಾಸ್ತ್ರೀಯ ಸಂಗೀತ ಮತ್ತು ಇತರ ಎಲೆಕ್ಟ್ರಾನಿಕ್ ಉಪಕರಣಗಳನ್ನು ದರ ಗುತ್ತಿಗೆ ಆಧಾರದ ಮೇಲೆ ಬಾಡಿಗೆಗೆ ಪಡೆಯುವ ಬಗ್ಗೆ ದಿನಾಂಕ: 1-9-2005 ರಿಂದ 31-8-2006 ರ ಒಂದು ವರ್ಷದ ಅವಧಿಗೆ ನೀಡುವ ಬಗ್ಗೆ ಅನುಭವಸ್ಥ ಹಾಗೂ ಪ್ರಸಿದ್ಧ ಸಂಸ್ಥೆಗಳಿಂದ ಟೆಂಡರನ್ನು ಕರೆಯಲಾಗಿದೆ.

ಈ ಸಂಬಂಧ ಅವಶ್ಯಕ ಉಪಕರಣಗಳ ವಿವರಗಳನ್ನು ಈ ಕೆಳಗೆ ಕೊಡಲಾಗಿದೆ:-

| ಕ್ರಮ ಸಂಖ್ಯೆ | ಪಬ್ಲಿಕ್ ಅಡ್ರೆಸ್ ಸಿಸ್ಟಮ್‌ನ ಉಪಕರಣಗಳ ವಿವರ | ದರ ರೂ. ಪೈ. |
|---|---|---|
| 01 | ಕಾಲಂ ಸ್ಪೀಕರ್ 60 ಡಬ್ಲ್ಯೂ 100 ವಿ (ಇನ್‌ಡೋರ್) | |
| 02 | ಹೆವಿ ಡ್ಯೂಟಿ ಸ್ಪೀಕರ್ ವಿತ್ ಎಲ್‌ಎಂಯು 12", 200 ಡಬ್ಲ್ಯೂ | |
| 03 | ಸ್ಪೀಕರ್ ಕೇಬಲ್ (ಮಿನಿಮಂ 200 ಫೀಟ್ ಲೆನ್ತ್) | |
| 04 | 2.5 ಕೆ.ವಿ.ಎ. ಜನರೇಟರ್ per day | |
| 05 | ಟೈಮ್ ಡಿಲೇ : ಎಕೋ ಯುನಿಟ್ | |
| 06 | ಪ್ರಿ-ಆಂಪ್ಲಿಫೈಯರ್ 6 ಚಾನಲ್ | |
| 07 | ಪ್ರಿ-ಆಂಪ್ಲಿಫೈಯರ್ 12 ಚಾನಲ್ | |
| 08 | ಪವರ್ ಆಂಪ್ಲಿಫೈಯರ್ 100 ವ್ಯಾಟ್ಸ್ | |
| 09 | ಪವರ್ ಆಂಪ್ಲಿಫೈಯರ್ 200 ವ್ಯಾಟ್ಸ್ | |
| 10 | ಪವರ್ ಆಂಪ್ಲಿಫೈಯರ್ 300 ವ್ಯಾಟ್ಸ್ | |
| 11 | ಪವರ್ ಆಂಪ್ಲಿಫೈಯರ್ (ಬೂಸ್ಟರ್) 600 ವ್ಯಾಟ್ಸ್ | |
| 12 | ಕಾಲಂ ಸ್ಟ್ರಕ್ಚರ್ 25 ಫೀಟ್ (if required) | |
| 13 | ಬ್ಯಾಟರಿ ಸ್ಟೇಷನ್ 24 ವ್ಯಾಟ್ಸ್ ಡಿ.ಸಿ. per day | |
| 14 | ಹೆವಿ ಡ್ಯೂಟಿ ಔಟ್ ಡೋರ್ ಯೂನಿಟ್ ಫಾರ್ ಹಾರನ್ 40 ವ್ಯಾಟ್ಸ್ | |
| 15 | ಲೈನ್ ಮ್ಯಾಚಿಂಗ್ ಯೂನಿಟ್ | |
| 16 | ರೆಕಾರ್ಡಿಂಗ್ : ಪ್ಲೇಬ್ಯಾಕ್ ಡೆಕ್ | |
| 17 | ಟ್ರಂಪ್ಟ್, ಹಾರನ್ ಫಾರ್ ಔಟ್ ಡೋರ್ | |
| 18 | ಫಾರ್ ಸಿ 60 ಕ್ಯಾಸೆಟ್ (ಫಾರ್ ಆಡಿಯೋ ರೆಕಾರ್ಡಿಂಗ್ ಇನ್‌ಕ್ಲೂಡಿಂಗ್ ಲೇಬರ್ ಚಾರ್ಜಸ್) | |
| 19 | ಪವರ್ ಸಪ್ಲೈ ಯೂನಿಟ್, ಎಲ್‌ಬಿಡಿ 8774 | |
| 20 | ಚೇರ್‌ಮನ್ ಯೂನಿಟ್, ಎಲ್‌ಬಿಡಿ 8781 | |
| 21 | ಡೆಲಿಗೇಟ್ ಯೂನಿಟ್ ಎಲ್‌ಬಿಡಿ 8782 | |
| 22 | ಸೆಕ್ರೆಟರಿ ಯೂನಿಟ್ ಎಲ್‌ಬಿಡಿ 8783 | |
| 23 | ಮೈಕ್ ಎಕ್ಸ್‌ಟೆನ್‌ಷನ್ ಯೂನಿಟ್ ಎಲ್‌ಬಿಡಿ 8784 | |
| 24 | 2.5 ಕೆ.ವಿ.ಎ. ಸ್ಟೆಬಿಲೈಜರ್ | |
| 25 | ಮೈಕ್ ವಿತ್ 25 ಫೀಟ್ ಕೇಬಲ್ ಅಂಡ್ ಎಂಡ್ ಕನೆಕ್ಟರ್ | |
| 26 | ಮಲ್ಟಿ ಕೋಡ್ ಕೇಬಲ್ ಜಿ.ಬಿ. | |
| 27 | ಎಫ್.ಎಂ. ಮೈಕ್ ವಿತ್ ರಿಸೀವರ್ | |
| 28 | ಹೈಟೆಡ್ ಸ್ಟ್ಯಾಂಡ್ ವಿತ್ 1000 ವ್ಯಾಟ್ಸ್ ಸ್ಪೀಕರ್ | |

**ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳು ಈ ಕೆಳಗಿನಂತೆ ಇವೆ:-**

1) ಮೊಹರಾದ ಟೆಂಡರ್ ಲಕೋಟೆ ಮೇಲೆ "ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡು ದರ ಗುತ್ತಿಗೆ" ಎಂದು ಬರೆದಿರತಕ್ಕದ್ದು.
2) ಸಲ್ಲಿಸಿರುವ ಟೆಂಡರ್‌ನೊಂದಿಗೆ ಇ.ಎಂ.ಡಿ. (ಠೇವಣಿ) ಮೊತ್ತ ರೂ.10,000/- (ರೂಪಾಯಿ ಹತ್ತು ಸಾವಿರಗಳು ಮಾತ್ರ)ಕ್ಕೆ ಬ್ಯಾಂಕ್ ಡ್ರಾಫ್ಟ್‌ನ್ನು "ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಸಲ್ಲಿಸತಕ್ಕದ್ದು.

3) ಇ.ಎಂ.ಡಿ. ಸಂಬಂಧ ಬ್ಯಾಂಕ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4) ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕಃ 9-8-2005 ರ ಮಧ್ಯಾಹ್ನ 3-00 ಗಂಟೆ. ಟೆಂಡರ್‌ಗಳನ್ನು ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆಃ 23, ನೆಲಮಹಡಿ, ವಿಧಾನಸೌಧ, ಬೆಂಗಳೂರು, ಇಲ್ಲಿಗೆ ಸಲ್ಲಿಸತಕ್ಕದ್ದು. ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
5) ಈ ಟೆಂಡರ್‌ಗಳನ್ನು ದಿನಾಂಕಃ 9-8-2005 ರ ಮಧ್ಯಾಹ್ನ 3-30 ಗಂಟೆಗೆ ಅಧೀನ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ-1), ಕೊಠಡಿ ಸಂಖ್ಯೆಃ 23, ವಿಧಾನಸೌಧ, ಬೆಂಗಳೂರು, ಇವರ ಕಚೇರಿಯಲ್ಲಿ ತೆರೆಯಲಾಗುವುದು.
6) ನಮೂದಿಸಿರುವ ದರಗಳಲ್ಲಿ ಉಪಕರಣಗಳ ಸಾಗಾಣಿಕೆ ವೆಚ್ಚ ಮತ್ತು ಕಾರ್ಮಿಕ ವೆಚ್ಚವೂ ಸೇರಿರತಕ್ಕದ್ದು.
7) ಉಪಕರಣಗಳನ್ನು 2ನೇ ದಿನ ಅಥವಾ ನಂತರದ ದಿನಗಳಿಗೆ ಉಪಯೋಗಿಸಿದಲ್ಲಿ, ಸಂಸ್ಥೆಯು ಬಾಡಿಗೆ ವೆಚ್ಚದಲ್ಲಿ ಶೇ. 25ರಷ್ಟು ರಿಯಾಯಿತಿ ನೀಡತಕ್ಕದ್ದು.
8) ಒಳ್ಳೆಯ ಗುಣಮಟ್ಟದ ಉಪಕರಣಗಳನ್ನೇ ಸಂಸ್ಥೆಯು ಸರಬರಾಜು ಮಾಡತಕ್ಕದ್ದು.
9) ಅವಶ್ಯಕತೆಗನುಸಾರವಾಗಿ **ರಜಾ ದಿನಗಳಲ್ಲೂ ಹಾಗೂ ಅತ್ಯಂತ ಕಡಿಮೆ ಕಾಲಾವಕಾಶದಲ್ಲಿ** ಸಹ ಧ್ವನಿವರ್ಧಕ ವ್ಯವಸ್ಥೆ ಮತ್ತು ಶಾಸ್ತ್ರೀಯ ಸಂಗೀತ ವ್ಯವಸ್ಥೆಯನ್ನು ಮಾಡಲು ಸಂಸ್ಥೆಯು ಸಿದ್ಧವಿರತಕ್ಕದ್ದು.
10) ದೊಡ್ಡ ಪ್ರಮಾಣದ ಸಭೆ ಃ ಸಮಾರಂಭಗಳಲ್ಲಿ ಧ್ವನಿವರ್ಧಕ ವ್ಯವಸ್ಥೆ ಮಾಡಿ ಅನುಭವವಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
11) ಉತ್ತಮ ಗುಣಮಟ್ಟದ ಉಪಕರಣಗಳನ್ನು ಉಪಯೋಗಿಸಿಕೊಂಡು ತೃಪ್ತಿಕರವಾಗಿ ಧ್ವನಿವರ್ಧಕ ವ್ಯವಸ್ಥೆಯನ್ನು ಏರ್ಪಾಡು ಮಾಡಲು ವಿಫಲರಾದಲ್ಲಿ, ಅವಧಿಗೆ ಮೊದಲೇ ಗುತ್ತಿಗೆಯನ್ನು ರದ್ದುಗೊಳಿಸಲು ಮತ್ತು ಇ.ಎಂ.ಡಿ. (ಭದ್ರತಾ ಠೇವಣಿ) ಮೊತ್ತವನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾದಿರಿಸಿದೆ.
12) ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಭದ್ರತಾ ಠೇವಣಿಯಾಗಿ ಇಟ್ಟುಕೊಳ್ಳಲಾಗುವುದು. ಗುತ್ತಿಗೆ ಅವಧಿ ಮುಗಿದ ಮೇಲೆ ಯಾವುದೇ ಬಾಕಿ / ದೂರು ಇಲ್ಲದಿದ್ದಲ್ಲಿ, ಈ ಮೊತ್ತವನ್ನು ಬಡ್ಡಿ ರಹಿತವಾಗಿ ಹಿಂದಿರುಗಿಸಲಾಗುವುದು.
13) ಕೇವಲ 4 ಅಥವಾ 5 ಗಂಟೆಯ ಕಾಲಾವಕಾಶದಲ್ಲಿ ಧ್ವನಿವರ್ಧಕ ವ್ಯವಸ್ಥೆಯ ಏರ್ಪಾಡುಗಳನ್ನು ಯಾವುದೇ ಕಾರಣ ನೀಡದೇ ಸಿದ್ಧಗೊಳಿಸಲು ಶಕ್ತರಿರುವ ಸಂಸ್ಥೆಗಳು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸತಕ್ಕದ್ದು.
14) ಗುತ್ತಿಗೆ ಅವಧಿಯು ದಿನಾಂಕಃ 1-9-2005 ರಿಂದ ಒಂದು ವರ್ಷದ ಅವಧಿಗೆ ಇರುತ್ತದೆ.
15) ಅಯಶಸ್ವಿ ಟೆಂಡರ್‌ದಾರರ ಬ್ಯಾಂಕ್ ಡ್ರಾಫ್ಟ್‌ನ್ನು ಹಿಂದಿರುಗಿಸಲಾಗುವುದು.
16) ಟೆಂಡರ್‌ನ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ, ಗುತ್ತಿಗೆಯನ್ನು ರದ್ದುಪಡಿಸಲು ಮತ್ತು ಇ.ಎಂ.ಡಿ. (ಭದ್ರತಾ ಠೇವಣಿ) ಯನ್ನು ಮುಟ್ಟುಗೋಲು ಹಾಕುವ ಹಕ್ಕನ್ನು ಸರ್ಕಾರ ಕಾಯ್ದಿರಿಸಿದೆ.
17) ಯಾವುದೇ ಕಾರಣವನ್ನು ನೀಡದೇ, ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಸ್ವೀಕರಿಸುವ ಸಮರ್ಥ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.
18) ಯಶಸ್ವಿ ಟೆಂಡರ್‌ದಾರರು ಆದೇಶ ನೀಡಿದ 15 ದಿನಗಳೊಳಗೆ ನಿಗದಿತ ಮೊತ್ತದ ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಸಹಿ ಮಾಡಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 373

**ಹೆಚ್.ಕೆ. ರವಿಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ-1)

**ಕಾರಾಗೃಹಗಳ ಉಪ ಮಹಾನಿರೀಕ್ಷಕರವರ ಕಛೇರಿ, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು-100**

**ಪ್ರಕಟಣೆ ಸಂಖ್ಯೆ/ಬೆಂಕೇಕಾ/ಕಾ.ನಿ/497/2495/04-05, ದಿನಾಂಕ: 29ನೇ ಜೂನ್ 2005**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಛಯದಲ್ಲಿನ ಅಂಗಡಿ ಮಳಿಗೆಗಳಿಗೆ ಟೆಂಡರ್ ಆಧಾರದ ಮೇಲೆ ಸ್ಪರ್ಧಾತ್ಮಕ ದರಗಳನ್ನು ಕರೆದು 2005-06ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ಪಡೆಯಲು ಬಹಿರಂಗ ಹರಾಜನ್ನು ದಿನಾಂಕ: 27.7.2005 ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 3500 ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 600 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮುಚ್ಛಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ, ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

**ಅಂಗಡಿ ಮಳಿಗೆಗಳ ತಿಂಗಳ ಬಾಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.**

| ಕ್ರ. ಸಂ. | ಅಂಗಡಿ ಮಳಿಗೆಗಳು | ತಿಂಗಳ ಬಾಡಿಗೆ | 10 ತಿಂಗಳ ಬಾಡಿಗೆಯಷ್ಟು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುಪು ಠೇವಣಿ |
|---|---|---|---|---|
| 1. | ಉಪಹಾರಗೃಹ (2 ಯೂನಿಟ್) | 1960 | ನಿಗದಿಯಾದ ಬಾಡಿಗೆಯ 10 ತಿಂಗಳ ಮೊತ್ತವನ್ನು ಠೇವಣಿಯಾಗಿ ಇಡುವುದು. | 2000 |
| 2. | ದಿನಸು ಮಳಿಗೆ (2 ಯೂನಿಟ್) | 1960 | | 2000 |
| 3. | ಹಿಟ್ಟಿನ ಗಿರಣಿ (1 ಯೂನಿಟ್) | 980 | | 1000 |
| 4. | ಸಲೂನ್ (1 ಯೂನಿಟ್) | 980 | | 1000 |
| 5. | ಖಾಲಿ ಕೊಠಡಿ | 980 | | 1000 |
| 6. | ವರ್ಕ್‌ಶಾಪ್ (1 ಯೂನಿಟ್) | 980 | | 1000 |

ಹೆಚ್ಚಿನ ಮಾಹಿತಿಗಳು ಮತ್ತು ನಿಬಂಧನೆಗಳ ವಿವರಗಳನ್ನು ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು, ಇವರಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು, ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಪಿ.ಆರ್. 381

ಕಾರಾಗೃಹಗಳ ಉಪ ಮಹಾ ನಿರೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು.